| 1 | 2 | 3 | 4 | 5 | 6 | 7 |
|---|---|---|---|---|---|---|
| 508–869 | 12 | ತೋಟಗಾರಿಕೆ ಇಲಾಖೆಯಲ್ಲಿ ಸಹಾಯಕ ತೋಟಗಾರಿಕೆ ಅಧಿಕಾರಿಗಳು – 343+19 (ಬ್ಯಾಕ್‌ಲಾಗ್) ಹುದ್ದೆಗಳು<br>Assistant Horticulture Officer in the Department of Horticulture – 343 +19 (Backlog) posts | ₹:21,600–40,500 | Must be a holder of a Degree in Horticulture of a University established by law in India | – ಅದೇ– | 19 ಬ್ಯಾಕ್‌ಲಾಗ್ ಹುದ್ದೆಗಳು |

**19 ಬ್ಯಾಕ್‌ಲಾಗ್ ಹುದ್ದೆಗಳು**

| ಮೀಸಲಾತಿ | ಇ | ಅಂ.ವಿ | ಒಟ್ಟು |
|---|---|---|---|
| ಪ.ಜಾ | 14 | 02*/** | 16 |
| ಪ.ಪಂ. | 02 | 01* | 03 |
| ಒಟ್ಟು | 16 | 03 | 19 |

* ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು

** ಶ್ರವಣದೋಷ ಅಭ್ಯರ್ಥಿಗಳು

**ರಾಜ್ಯ ವೃಂದದ ಹುದ್ದೆಗಳು – 246 ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಅಂ.ವಿ | ಕಮಾಅ | ಒಟ್ಟು |
|---|---|---|---|---|---|---|---|
| ಪ.ಜಾ | 09 | 11 | 09 | 04 | 02***/* | 02 | 37 |
| ಪ.ಪಂ. | 03 | 02 | 01 | 01 | – | – | 07 |
| ಪ್ರವರ್ಗ–1 | 02 | 03 | 03 | 01 | – | 01 | 10 |
| ಪ್ರ.2ಎ | 09 | 11 | 10 | 04 | 02***/* | 02 | 38 |
| ಪ್ರ.2ಬಿ | 02 | 03 | 03 | 01 | – | 01 | 10 |
| ಪ್ರ..3ಎ | 02 | 02 | 03 | 01 | – | 01 | 09 |
| ಪ್ರ..3ಬಿ | 05 | 04 | 02 | 01 | – | – | 12 |
| ಸಾ.ಅ. | 33 | 37 | 31 | 12 | 04*/**/*** | 06 | 123 |
| **ಒಟ್ಟು** | **65** | **73** | **62** | **25** | **08** | **13** | **246** |

* ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು

** ಶ್ರವಣದೋಷ ಅಭ್ಯರ್ಥಿಗಳು

*** ಚಲನವಲನ ವೈಕಲ್ಯ ಅಭ್ಯರ್ಥಿಗಳು

| 1 | 2 | 3 | 4 | 5 | 6 | 7 |
|---|---|---|---|---|---|---|

**ಹೈದ್ರಾಬಾದ್ – ಕರ್ನಾಟಕ ಪ್ರದೇಶದ ರಾಜ್ಯ ಮಟ್ಟದ ಸ್ಥಳೀಯ ವೃಂದದ ಹುದ್ದೆಗಳು–94 ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಅಂ.ವಿ | ಕಮಾಅ | ಒಟ್ಟು |
|---|---|---|---|---|---|---|---|
| ಪ.ಜಾ | 04 | 07 | 06 | 02 | 01* | 01 | 21 |
| ಪ.ಪಂ. | 01 | 02 | 02 | – | 01* | – | 06 |
| ಪ್ರವರ್ಗ–1 | 02 | 02 | 02 | – | 01* | – | 07 |
| ಪ್ರ.2ಎ | 06 | 07 | 06 | 02 | 01* | 01 | 23 |
| ಪ್ರ.2ಬಿ | 01 | 02 | 02 | – | 01* | – | 06 |
| ಪ್ರ..3ಎ | 01 | 02 | 02 | – | 01* | – | 06 |
| ಪ್ರ..3ಬಿ | 01 | 03 | 02 | – | 01* | – | 07 |
| ಸಾ.ಅ. | 05 | 05 | 03 | 01 | 03 **/*** | 01 | 18 |
| **ಒಟ್ಟು** | **21** | **30** | **25** | **05** | **10** | **03** | **94** |

* ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು ** ಶ್ರವಣದೋಷ ಅಭ್ಯರ್ಥಿಗಳು *** ಚಲನವಲನ ವೈಕಲ್ಯ ಅಭ್ಯರ್ಥಿಗಳು

**ಹೈದ್ರಾಬಾದ್ – ಕರ್ನಾಟಕ ಪ್ರದೇಶದ ಸ್ಥಳೀಯ ವೃಂದಕ್ಕೆ 03 ಹುದ್ದೆಗಳು**

| ಮೀಸಲಾತಿ | ಇತರೆ | ಮಹಿಳೆ | ಒಟ್ಟು |
|---|---|---|---|
| ಪ.ಜಾ | 01 | – | 01 |
| ಪ.ಪಂ. | 01 | – | 01 |
| ಸಾ.ಅ. | – | 01 | 01 |
| **ಒಟ್ಟು** | **02** | **01** | **03** |

| 1 | 2 | 3 | 4 | 5 | 6 | 7 |
|---|---|---|---|---|---|---|
| **ಗ್ರೂಪ್ – "ಸಿ " ಹುದ್ದೆಗಳು** | | | | | | |
| 781–870 | 13 | ಆಯುಷ್ ಇಲಾಖೆಯಲ್ಲಿನ 50 + 40 ಶುಶ್ರೂಷಕಿಯರು<br>Female Staff Nurse in the Dept. of AYUSH – 50 + 40 posts | ರೂ.17650-32000 | Must have passed in SSLC or equivalent Qualification with Diploma in Nursing (3 ½ years Course) of an institution recognized by the Govt. of Karnataka. | ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40 | (see tables below) |

**ರಾಜ್ಯ ಸ್ಥಳೀಯ ವೃಂದ ವಲಯದ ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಕಮಾಅ | ಯೋನಿಅ | ಅಂ.ವಿ | ಒಟ್ಟು |
|---|---|---|---|---|---|---|---|---|
| ಪ.ಜಾ | 02 | 02 | 02 | – | – | – | 01* | **07** |
| ಪ.ಪಂ | 01 | 01 | – | – | – | – | – | **02** |
| ಪ್ರ.1 | 01 | 01 | – | – | – | – | – | **02** |
| 2ಎ | 02 | 02 | 02 | – | – | – | 01* | **07** |
| 2ಬಿ | 01 | 01 | – | – | – | – | – | **02** |
| 3ಎ | 01 | – | – | – | – | – | – | **01** |
| 3ಬಿ | 01 | 01 | – | – | – | – | – | **02** |
| ಸಾ.ಅ | 05 | 07 | 06 | 02 | 01 | 01 | 01* | **23** |
| **ಒಟ್ಟು** | **14** | **15** | **10** | **02** | **01** | **01** | **03** | **46** |

( Leprosy Cured ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬಹುದು)

**ಹೈದರಾಬಾದ್–ಕರ್ನಾಟಕ ಪ್ರದೇಶದ ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಇತರೆ | ಮಹಿಳೆ | ಒಟ್ಟು |
|---|---|---|---|
| ಪ.ಜಾ | 01 | – | 01 |
| ಪ.ಪಂ. | 01 | – | 01 |
| ಸಾ.ಅ | 01 | 01 | 02 |
| **ಒಟ್ಟು** | **03** | **01** | **04** |

| 1 | 2 | 3 | 4 | 5 | 6 | 7 |
|---|---|---|---|---|---|---|

**ಹೈದರಾಬಾದ್–ಕರ್ನಾಟಕ ಪ್ರದೇಶದ ಆರು ಜಿಲ್ಲೆಗಳಿಗೆ ಕಲ್ಪಿಸಿರುವ ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಕಮಾಅ | ಅಂ.ವಿ | ಒಟ್ಟು |
|---|---|---|---|---|---|---|---|
| ಪ.ಜಾ | 01 | 02 | 01 | – | – | 01* | **05** |
| ಪ.ಪಂ | 01 | – | – | – | – | – | **01** |
| ಪ್ರ.1 | 01 | 01 | – | – | – | – | **02** |
| 2ಎ | 01 | 02 | 01 | – | – | 01* | **05** |
| 2ಬಿ | 01 | – | – | – | – | – | **01** |
| 3ಎ | 01 | – | – | – | – | – | **01** |
| 3ಬಿ | 01 | – | – | – | – | – | **01** |
| ಸಾ.ಅ | 03 | 05 | 05 | 01 | 01 | 01* | **16** |
| **ಒಟ್ಟು** | **10** | **10** | **07** | **01** | **01** | **03*** | **32** |

**(* Leprosy Cured ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬಹುದು)**

**ರಾಜ್ಯ ವಲಯದ ವ್ಯಕ್ತಿಗಳಿಗೆ ಹೈದರಾಬಾದ್–ಕರ್ನಾಟಕ ಪ್ರದೇಶದ ಆರು ಜಿಲ್ಲೆಗಳಿಗೆ ಕಲ್ಪಿಸಿರುವ ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಅಂ.ವಿ | ಒಟ್ಟು |
|---|---|---|---|---|---|
| ಪ.ಜಾ | 01 | – | – | – | 01 |
| ಪ.ಪಂ | 01 | – | – | – | 01 |
| ಪ್ರ.1 | 01 | – | – | – | 01 |
| 2ಎ | 01 | – | – | – | 01 |
| ಸಾ.ಅ | 01 | 01 | 01 | 01* | 04 |
| **ಒಟ್ಟು** | **05** | **01** | **01** | **01** | **08** |

**(* Leprosy Cured ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬಹುದು)**

| 1 | 2 | 3 | 4 | 5 | 6 |
|---|---|---|---|---|---|
| 871–991 | 14 | ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಲ್ಲಿನ ಸಹಾಯಕ ನಗರ ಯೋಜಕರು – 121 ಹುದ್ದೆಗಳು<br>Assistant Town Planner in the Dept.of Town & Country Planning – 121 posts | ರೂ.17650–32000 | Must possess a Diploma in Civil Engineering from a recognised polytechnic or possess an equivalent qualification.<br><br>**ತತ್ಸಮಾನ ವಿದ್ಯಾರ್ಹತೆ:–**<br>i) Diploma in Civil Engineering (General)<br>ii) Diploma in Civil Engineering (Civil Draughtsmanship) | ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40 |

**ರಾಜ್ಯ ಮಟ್ಟದ ಕಛೇರಿಗಳಲ್ಲಿನ ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಕಮಾಅ | ಯೋ.ಅ | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ | 05 | 04 | 03 | 02 | 01 | – | 01* | **16** |
| ಪ.ಪಂ | 01 | 01 | 01 | – | – | – | – | **03** |
| ಪ್ರ.1 | 01 | 02 | 01 | – | – | – | – | **04** |
| 2ಎ | 03 | 04 | 04 | 02 | 01 | 01 | 01* | **16** |
| 2ಬಿ | 01 | 02 | 01 | – | – | – | – | **04** |
| 3ಎ | 01 | 02 | 01 | – | – | – | – | **04** |
| 3ಬಿ | 02 | 01 | 02 | 01 | – | – | – | **06** |
| ಸಾ.ಅ | 11 | 14 | 12 | 05 | 02 | 03 | 02* | **49** |
| **ಒಟ್ಟು** | **25** | **30** | **25** | **10** | **04** | **04** | **04*** | **102** |

***Leprosy cured / Hearing Impaired / Locomotor Disability / Mentally ill.**

<table>
<tr><th>1</th><th>2</th><th>3</th><th>4</th><th>5</th><th>6</th><th>7</th></tr>
<tr><td></td><td></td><td></td><td></td><td></td><td></td><td>
ಹೈದರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯ ಸೇರುವ ಹುದ್ದೆಗಳು
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ.</th><th>ಮಾ.ಸೈ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ</td><td>–</td><td>02</td><td>–</td><td>–</td><td>01*</td><td>03</td></tr>
<tr><td>ಪ.ಪಂ.</td><td>01</td><td>–</td><td>–</td><td>–</td><td>–</td><td>01</td></tr>
<tr><td>2ಎ</td><td>–</td><td>01</td><td>–</td><td>–</td><td>01</td><td>02</td></tr>
<tr><td>2ಬಿ</td><td>01</td><td>–</td><td>–</td><td>–</td><td>–</td><td>01</td></tr>
<tr><td>3ಎ</td><td>01</td><td>–</td><td>–</td><td>–</td><td>–</td><td>01</td></tr>
<tr><td>ಸಾ.ಅ</td><td>02</td><td>04</td><td>03</td><td>01</td><td>01*</td><td>11</td></tr>
<tr><td>ಒಟ್ಟು</td><td>05</td><td>07</td><td>03</td><td>01</td><td>03*</td><td>19</td></tr>
</table>
*Leprosy cured / Hearing Impaired / Locomotor Disability / Mentally ill.
</td></tr>
<tr><td>920–924</td><td>15</td><td>ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಸಹಾಯಕ ಉದ್ಯೋಗಾಧಿಕಾರಿ – 05 ಹುದ್ದೆಗಳು<br>Assistant Employment Officer in the Dept.of Employment and Training – 05 posts</td><td>₹:16,000 –29,600</td><td>Must be holder of a degree or possess equivalent examination.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40</td><td>
ರಾಜ್ಯ ವೃಂದಕ್ಕೆ ಸೇರಿದ ಹುದ್ದೆಗಳು :– 01 ಹುದ್ದೆ<br>
ಪರಿಶಿಷ್ಟ ಜಾತಿ(ಮಹಿಳೆ) – 01 ಹುದ್ದೆ<br>
ಹೈದ್ರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳು – 04 ಹುದ್ದೆಗಳು
<table>
<tr><th>ಮೀಸಲಾತಿ</th><th>ಇ</th><th>ಮ</th><th>ಒಟ್ಟು</th></tr>
<tr><td>ಪ.ಜಾ</td><td>01</td><td>–</td><td>01</td></tr>
<tr><td>ಪ.ಪಂ.</td><td>01</td><td>–</td><td>01</td></tr>
<tr><td>ಸಾ.ಅ.</td><td>01</td><td>01</td><td>02</td></tr>
<tr><td>ಒಟ್ಟು</td><td>03</td><td>01</td><td>04</td></tr>
</table>
</td></tr>
<tr><td>992–994</td><td>16</td><td>ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಮಹಿಳಾ ಶುಶ್ರೂಷಕಿಯರು – 03 ಹುದ್ದೆಗಳು</td><td>ರೂ.16000 –29600</td><td>Must have passed B.Sc. Nursing or three years diploma course in Nursing or its equivalent qualification.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38</td><td>
<table>
<tr><th>ಮೀಸಲಾತಿ</th><th>ಇತರೆ</th><th>ಅಂ.ವಿ</th><th>ಒಟ್ಟು</th></tr>
<tr><td>2ಎ</td><td>01</td><td>–</td><td>01</td></tr>
<tr><td>ಸಾ.ಅ</td><td>–</td><td>01*</td><td>01</td></tr>
<tr><td>ಒಟ್ಟು</td><td>01</td><td>01*</td><td>02</td></tr>
</table>
*ಚಲನ ವೈಕಲ್ಯ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು.
</td></tr>
</table>

| 1 | 2 | 3 | 4 | 5 | 6 | 7 |
|---|---|---|---|---|---|---|
| | | Female Staff Nurse in Morarji Desai Residential Schools. Department of Minorities Welfare – 03 posts | | **ತತ್ಸಮಾನ ವಿದ್ಯಾರ್ಹತೆ :**<br>ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಮತ್ತು 3 ವರ್ಷಗಳ ಜಿ.ಎನ್.ಎಮ್.ಕೋರ್ಸ್ ಜೊತೆಗೆ 6 ತಿಂಗಳ ಮಿಡ್‌ವೈಫರಿಯನ್ನು ಇಂಡಿಯನ್ ನರ್ಸಿಂಗ್ ಕೌನ್ಸಿಲ್/ಕರ್ನಾಟಕ ನರ್ಸಿಂಗ್ ಕೌನ್ಸಿಲ್‌ನಿಂದ ಮಾನ್ಯತೆ ಪಡೆದಿರಬೇಕು. | ಪ.ಜಾ<br>ಪ.ಪಂ } 40<br>ಪ್ರ 1 | **ಹೈದರಾಬಾದ್–ಕರ್ನಾಟಕ ಪ್ರದೇಶದ ಹುದ್ದೆಗಳ ವರ್ಗೀಕರಣ**<br>ಮೀಸಲಾತಿ / ಇತರೆ / ಒಟ್ಟು<br>ಸಾ.ಅ / 01 / 01<br>**ಸೂಚನೆ:** ಈ ಮೇಲ್ಕಂಡ 02 + 01 ಹುದ್ದೆಗಳು ಮಹಿಳಾ ಅಭ್ಯರ್ಥಿಗಳಿಗೆ ಮಾತ್ರ ಮೀಸಲಾಗಿರುತ್ತದೆ |
| 995 | 17 | ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳ ನಿರ್ದೇಶನಾಲಯದಲ್ಲಿನ ರೇಡಿಯೋಗ್ರಾಫರ್–01 ಹುದ್ದೆ<br>Radiographer in the Department of ESI (Medical) Services. | ರೂ.16000–29600 | Must possess degree in Medical Radiography from a recognized University. | – ಅದೇ – | **ಮೀಸಲಾತಿ / ಇತರೆ / ಒಟ್ಟು**<br>**ಪ.ಪಂ. / 01 / 01** |
| 996–999 | 18 | ಆಯುಷ್ ಇಲಾಖೆಯಲ್ಲಿನ ಔಷಧ ವಿಶ್ಲೇಷಕರು – 04 ಹುದ್ದೆಗಳು<br>Drugs Analyst in the Dept. of AYUSH – 04 posts | 16000–29600 | 1) Chemistry:<br>i) Must be holder of a Bachelor degree in science with Chemistry as one of the subject awarded by an University.<br>ii) Must have three years of experience in Drug Analysis in any recognized or approved manufacturing unit or Drug Testing Laboratory. | ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ<br>ಪ್ರ 2ಬಿ<br>ಪ್ರ 3ಎ } 38<br>ಪ್ರ 3ಬಿ<br>ಪ.ಜಾ<br>ಪ.ಪಂ } 40<br>ಪ್ರ 1 | ಮೀಸಲಾತಿ / ಇತರೆ / ಮಹಿಳೆ / ಒಟ್ಟು<br>ಪ.ಜಾ / 01 / – / 01<br>ಪ.ಪಂ. / 01 / – / 01<br>ಸಾ.ಅ / 01 / 01 / 02<br>**ಒಟ್ಟು / 03 / 01 / 04** |

| 1 | 2 | 3 | 4 | 5 | 6 | 7 |
|---|---|---|---|---|---|---|
| | | | | 2) Microbiology:<br><br>i) Must be holder of a Bachelor degree in science with Micro Biology awarded by an University.<br><br>ii) Must have 3 years of experience in Drug Analysis in any recognized or approved manufacturing unit or Drug Testing Laboratory. | | |
| | | | | 3) Botany<br>i) Must be holder of a Bachelor degree in science with Botany as one of the subject awarded by an University.<br><br>ii) Must have three years of experience in Drug Analysis in any recognized or approved manufacturing unit OR Drug Testing Laboratory. | | |

<table>
<tr><th>1</th><th>2</th><th>3</th><th>4</th><th>5</th><th>6</th><th>7</th></tr>
<tr><td></td><td></td><td></td><td></td><td>4) Pharmacy<br>i) Must be holder of a Bachelor degree in Pharmacy awarded by an University.<br>ii) Must have three years of experience in Drug Analysis in any recognized or approved manufacturing unit Drug Testing Laboratory.</td><td></td><td></td></tr>
<tr><td>925–1108</td><td>19</td><td>ತೋಟಗಾರಿಕೆ ಇಲಾಖೆಯಲ್ಲಿ ತೋಟಗಾರಿಕೆ ಸಹಾಯಕರು 171+13 (ಅಂಗವಿಕಲ ಬ್ಯಾಕ್‌ಲಾಗ್) ಹುದ್ದೆಗಳು<br>Horticulture Assistant in the Department of Horticulture – 171 +13 (PH - Backlog)</td><td>₹: 12,500–24,000</td><td>Must have passed PUC Examination or possess equivalent qualification and must have undergone successfully 10 months training in Horticulture conducted by the Horticulture Department OR Must possess Job-oriented Course Certificate in Horticulture subject conducted by the Directorate of Vocational Education.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40</td><td>13 ಅಂಗವಿಕಲ ಬ್ಯಾಕ್‌ಲಾಗ್ ಹುದ್ದೆಗಳು
<table>
<tr><th>ಮೀಸಲಾತಿ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ</td><td>02*/**</td><td>02</td></tr>
<tr><td>ಪ.ಪಂ.</td><td>01*</td><td>01</td></tr>
<tr><td>ಪ್ರವರ್ಗ–1</td><td>01*</td><td>01</td></tr>
<tr><td>2ಎ</td><td>02*/**</td><td>02</td></tr>
<tr><td>2ಬಿ</td><td>01*</td><td>01</td></tr>
<tr><td>3ಬಿ</td><td>01*</td><td>01</td></tr>
<tr><td>ಸಾ.ಆ.</td><td>04*/**/***/****</td><td>04</td></tr>
<tr><td>ಒಟ್ಟು</td><td>13</td><td>13</td></tr>
<tr><td colspan="3">* ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು<br>** ಶ್ರವಣದೋಷ ಅಭ್ಯರ್ಥಿಗಳು<br>*** ಚಲನವಲನ ವೈಕಲ್ಯ ಅಭ್ಯರ್ಥಿಗಳು<br>**** ಕುಷ್ಠರೋಗದಿಂದ ಗುಣಮುಖರಾದ ಅಭ್ಯರ್ಥಿಗಳು</td></tr>
</table></td></tr>
</table>

| 1 | 2 | 3 | 4 | 5 | 6 | 7 |
|---|---|---|---|---|---|---|

**ರಾಜ್ಯ ವೃಂದದ ಹುದ್ದೆಗಳು – 159 ಹುದ್ದೆಗಳು**

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಅಂ.ವಿ | ಕಮಾಅ | ಯೋ.ಅ | ಒಟ್ಟು |
|---|---|---|---|---|---|---|---|---|
| ಪ.ಜಾ | 05 | 07 | 06 | 02 | 02 ***/**** | 01 | 01 | **24** |
| ಪ.ಪಂ. | – | 02 | 01 | – | – | 01 | 01 | **05** |
| ಪ್ರವರ್ಗ–1 | 02 | 02 | 01 | 01 | – | – | – | **06** |
| ಪ್ರ.2ಎ | 05 | 07 | 07 | 02 | 02 ***/**** | 01 | 01 | **25** |
| ಪ್ರ.2ಬಿ | 02 | 02 | 01 | 01 | – | – | – | **06** |
| ಪ್ರ..3ಎ | 02 | 02 | 01 | 01 | – | – | – | **06** |
| ಪ್ರ.3ಬಿ | 02 | 03 | 02 | – | 01* | – | – | **08** |
| ಸಾ.ಅ. | 16 | 24 | 19 | 08 | 04*/**/***/ **** | 04 | 04 | **79** |
| **ಒಟ್ಟು** | **34** | **49** | **38** | **15** | **09** | **07** | **07** | **159** |

* ಅಂಧ / ದೃಷ್ಟಿಮಾಂದ್ಯ ಅಭ್ಯರ್ಥಿಗಳು ** ಶ್ರವಣದೋಷ ಅಭ್ಯರ್ಥಿಗಳು

*** ಚಲನವಲನ ವೈಕಲ್ಯ ಅಭ್ಯರ್ಥಿಗಳು **** ಕುಷ್ಠರೋಗದಿಂದ ಗುಣಮುಖರಾದ ಅಭ್ಯರ್ಥಿಗಳು

**ಹೈದ್ರಾಬಾದ್ – ಕರ್ನಾಟಕ ಪ್ರದೇಶದ ಸ್ಥಳೀಯ ವೃಂದದ ಹುದ್ದೆಗಳು– 10 ಹುದ್ದೆಗಳು**

(ಕೈಬಿಡಲಾದ 07 ಮೀಸಲಾತಿ ಬಿಂದುಗಳನ್ನು ಸರಿದೂಗಿಸಿದೆ)

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಅಂ.ವಿ | ಒಟ್ಟು |
|---|---|---|---|---|---|---|
| ಪ.ಜಾ | – | – | – | – | – | – |
| ಕೈಬಿಡಲಾದ ಮೀಸಲಾತಿ ಬಿಂದು | – | – | +01 | – | 01* | **02** |
| ಪ್ರವರ್ಗ–1 | – | – | – | – | 01* | **01** |
| ಪ್ರ.2ಎ | – | – | – | – | – | – |
| ಕೈಬಿಡಲಾದ ಮೀಸಲಾತಿ ಬಿಂದು | – | – | – | – | 01* | **01** |
| ಪ್ರ.3ಎ | – | – | – | – | – | – |
| ಕೈಬಿಡಲಾದ ಮೀಸಲಾತಿ ಬಿಂದು | – | +01 | +01 | – | – | **+02** |
| ಸಾ.ಅ. | 01 | – | – | 01 | – | **02** |
| ಕೈಬಿಡಲಾದ ಮೀಸಲಾತಿ ಬಿಂದು | – | – | – | – | +02* | **+02** |
| **ಒಟ್ಟು** | **01** | – | – | **01** | **01** | **03** |
| **ಕೈಬಿಡಲಾದ ಮೀಸಲಾತಿ ಬಿಂದು** | – | **+01** | **+02** | – | **+04** | **+07** |

**ಹೈದ್ರಾಬಾದ್ – ಕರ್ನಾಟಕ ಪ್ರದೇಶದ ರಾಜ್ಯ ಮಟ್ಟದ ಸ್ಥಳಿಯ ವೃಂದದ ಹುದ್ದೆಗಳು**

**– 02 ಹುದ್ದೆಗಳು**

| ಮೀಸಲಾತಿ | ಇತರೆ |
|---|---|
| ಪ.ಜಾ | 01 |
| ಸಾ.ಅ. | 01 |
| **ಒಟ್ಟು** | **02** |

<table>
<tr><th>1</th><th>2</th><th>3</th><th>4</th><th>5</th><th>6</th><th>7</th></tr>
<tr><td colspan="7">ಭಾಗ–2<br>ನಗರ ಯೋಜನೆ ಇಲಾಖೆ ಸೇವೆಗಳು (ನೇಮಕಾತಿ) ನಿಯಮಗಳು 1996 ರನ್ವಯ ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಸಂದರ್ಶನದ ಮೂಲಕ ನೇಮಕಾತಿ<br>ಗ್ರೂಪ್–'ಎ' ಹುದ್ದೆಗಳು</td></tr>
<tr>
<td>1109–1142</td>
<td>20</td>
<td>ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರು 31+03 (ಬ್ಯಾಕ್‌ಲಾಗ್) ಹುದ್ದೆಗಳು<br>Assistant Director in the Department of Town and Country Planning – 31+03 (BL) posts</td>
<td>₹:28,100 –50,100</td>
<td>1) Must possess a degree in Civil Engineering or Architecture from a recognised University or a certificate from the Institute of Engineers that he has passed Part A & B of the Associate Membership Examination of Institute of Engineers; and<br>2) Post-Graduate Degree or Diploma in Town & Country Planning or Urban Design or Urban Planning or City Planning or Landscape Architecture or Transportation Planning or such other equivalent qualification recognised by the Institute of Town Planners, India for appointment and also for membership of the Institute of Town Planners, India.</td>
<td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40</td>
<td>ರಾಜ್ಯ ವೃಂದಕ್ಕೆ ಸೇರಿದ ಹುದ್ದೆಗಳು :–26+03(ಬ್ಯಾಕ್‌ಲಾಗ್) ಹುದ್ದೆಗಳು
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಒಟ್ಟು</th></tr>
<tr><td>ಪ.ಜಾ</td><td>01+01 (ಬ್ಯಾ.ಲಾ)</td><td>01+01 (ಬ್ಯಾ.ಲಾ)</td><td>01+01 (ಬ್ಯಾ.ಲಾ)</td><td>01</td><td>04+03 (ಬ್ಯಾ.ಲಾ)</td></tr>
<tr><td>ಪ.ಪಂ.</td><td>–</td><td>01</td><td>–</td><td>–</td><td>01</td></tr>
<tr><td>ಪ್ರವರ್ಗ–1</td><td>–</td><td>–</td><td>01</td><td>–</td><td>01</td></tr>
<tr><td>ಪ್ರ.2ಎ</td><td>01</td><td>01</td><td>02</td><td>–</td><td>04</td></tr>
<tr><td>ಪ್ರ.2ಬಿ</td><td>–</td><td>01</td><td>–</td><td>–</td><td>01</td></tr>
<tr><td>ಪ್ರ.3ಎ</td><td>–</td><td>01</td><td>–</td><td>–</td><td>01</td></tr>
<tr><td>ಪ್ರ.3ಬಿ</td><td>––</td><td>01</td><td>–</td><td>–</td><td>01</td></tr>
<tr><td>ಸಾ.ಅ.</td><td>04</td><td>04</td><td>03</td><td>02</td><td>13</td></tr>
<tr><td>ಒಟ್ಟು</td><td>06+01</td><td>10+01</td><td>07+01</td><td>03</td><td>26+03</td></tr>
</table>
ಹೈದ್ರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳು – 05 ಹುದ್ದೆಗಳು
<table>
<tr><th>ಮೀಸಲಾತಿ</th><th>ಇ</th><th>ಮ</th><th>ಒಟ್ಟು</th></tr>
<tr><td>ಪ.ಜಾ.</td><td>01</td><td>–</td><td>01</td></tr>
<tr><td>ಪ.ಪಂ.</td><td>01</td><td>–</td><td>01</td></tr>
<tr><td>ಪ್ರವರ್ಗ–1</td><td>01</td><td>–</td><td>01</td></tr>
<tr><td>ಸಾ.ಅ.</td><td>01</td><td>01</td><td>02</td></tr>
<tr><td>ಒಟ್ಟು</td><td>04</td><td>01</td><td>05</td></tr>
</table>
</td>
</tr>
</table>

**ಭಾಗ–3**

**ವಿಶೇಷ ನೇಮಕಾತಿ ನಿಯಮಗಳು 2001 ಜಾರಿಯಾದ ಸಮಯದಲ್ಲಿ ಬ್ಯಾಕ್‌ಲಾಗ್ ಹುದ್ದೆಗಳೆಂದು ಗುರುತಿಸಲಾದ ಈ ಕೆಳಕಂಡ ಗ್ರೂಪ್ 'ಬಿ' ಹುದ್ದೆಗಳು**

| ಹುದ್ದೆಗಳ ಅನುಕ್ರಮ ಸಂಖ್ಯೆ | ಹುದ್ದೆಯ ಸಂಕೇತ/ POST CODE | ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|---|
| 1 | 2 | 3 | 4 | 5 | 6 | 7 |
| 11–14 | 21 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ತಮಿಳು ಉಪನ್ಯಾಸಕರು – 04 ಹುದ್ದೆಗಳು<br>Tamil Lecturer in BBMP - 04 posts | ₹.22,800 – 43,200 | Master's Degree of a recognized University or equivalent qualification in the concerned subject (in this case Tamil) with a minimum 3 years teaching experience as High School Teachers. | ಕನಿಷ್ಠ – 18<br>ಗರಿಷ್ಠ – 40 | ಪರಿಶಿಷ್ಟ ಜಾತಿ(ಇತರೆ) – 01 ಹುದ್ದೆ<br>ಪರಿಶಿಷ್ಟ ಪಂಗಡ – 03 ಹುದ್ದೆಗಳು<br>(ಇತರೆ – 01 ಹುದ್ದೆ; ಮಹಿಳೆ–01 ಹುದ್ದೆ; ಗ್ರಾಮೀಣ– 01 ಹುದ್ದೆ) |

ಮಹಿಳೆಯರಿಗೆ / ಮಾಜಿ ಸೈನಿಕರಿಗೆ / ಗ್ರಾಮೀಣ / ಕಮಾಅ / ಯೋ.ನಿ.ಅ. ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**ಸೂಚನೆ:–** ನಿಗದಿಪಡಿಸಿದ ದೃಷ್ಟಿಮಾಂದ್ಯ ಅಂಗವಿಕಲತೆಯ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಈ ಹುದ್ದೆಗಳಿಗೆ ನಿಗದಿಪಡಿಸಿದ ಇತರೆ ಅಂಗವಿಕಲತೆಗಳಾದ ಶ್ರವಣದೋಷ/ಕುಷ್ಠರೋಗ ವಿಮುಕ್ತ/ಚಲನವಲನ ವೈಕಲ್ಯ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು

**ಸಂಕ್ಷೇಪ:–** ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ.ಮಾ.ಅ. – ಕನ್ನಡ ಮಾಧ್ಯಮದ ಅಭ್ಯರ್ಥಿ/ ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. – ಪರಿಶಿಷ್ಟ ಪಂಗಡ / ಪ್ರ.–ಪ್ರವರ್ಗ / ಸಾ.ಅ.–ಸಾಮಾನ್ಯ ಅರ್ಹತೆ / ಅಂ.ವಿ–ಅಂಗವಿಕಲ, ಯೋ.ನಿ.ಅ. – ಯೋಜನೆಗಳಿಂದ ನಿರ್ವಸ್ಥಿತರಾದ ಅಭ್ಯರ್ಥಿ

**ಆರ್.ವೆಂಕಟೇಶ್ ಕುಮಾರ್, ಭಾ.ಆ.ಸೇ.**
ಕಾರ್ಯದರ್ಶಿ(ಪ್ರಭಾರ) ಹಾಗೂ ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

PR - 41
SC - 300

## ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿ, ಗ್ರಾಮಲೆಕ್ಕಿಗರ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ, ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು–577 101

### ಅಧಿಸೂಚನೆ

**ಸಂಖ್ಯೆ: ಇಎಸ್‌ಟಿ(2) ಸಿಆರ್/ 66/2014–15, ದಿನಾಂಕ: 28–01–2015**

**ವಿಷಯ:** ಚಿಕ್ಕಮಗಳೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇಮಕಾತಿಗಾಗಿ ಅರ್ಜಿ ಆಹ್ವಾನಿಸುವ ಕುರಿತು.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂ. ಕಂಇ/299/ಬಿಎಸ್‌ಸಿ/2006 ದಿನಾಂಕ: 3–2–2009, ಮತ್ತು 24–07–2009

2. ಸರ್ಕಾರದ ಪತ್ರದ ಸಂ. ಕಂಇ 04 ಬಿಎಸ್‌ಸಿ 2011 ದಿನಾಂಕ 25–2–2011

3. ಸರ್ಕಾರದ ಆದೇಶ ಸಂ.ಕಂಇ 33 ಡಿಎಸ್‌ಪಿ 2012 ದಿನಾಂಕ 5–6–2012

4. ಸರ್ಕಾರದ ಸುತ್ತೋಲೆ ಸಂ ಕಂಇ 100 ಬಿಎಸ್‌ಸಿ 2011 ದಿನಾಂಕ 29–6–2012

ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯ ಚಿಕ್ಕಮಗಳೂರು ಜಿಲ್ಲಾ ಘಟಕದಲ್ಲಿ ಬರುವ ತಾಲ್ಲೂಕುಗಳಲ್ಲಿ 2012–13ನೇ ಸಾಲಿನ ನೇಮಕಾತಿ ಪ್ರಕ್ರಿಯೆಯಲ್ಲಿ ನೇಮಕಾತಿ ಪ್ರಕ್ರಿಯೆ ನಂತರ ಹಿಂಬಾಕಿ ಹುದ್ದೆಗಳು ಹಾಗೂ ವಯೋನಿವೃತ್ತಿ, ಮುಂಬಡ್ತಿ, ನಿಯಮ 6ರಡಿಯಲ್ಲಿ ವರ್ಗಾವಣೆ ಮತ್ತು ಮರಣ ಇನ್ನಿತರೆ ಕಾರಣಗಳಿಂದ ಒಟ್ಟು 56 ಹುದ್ದೆಗಳು ಖಾಲಿ ಇರುತ್ತವೆ. ಸದರಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬಾರ್ಡಿನೇಟ್ ಬ್ರಾಂಚ್) (ಕೇಡರ್ & ರೆಕ್ರೂಟ್‌ಮೆಂಟ್) (ತಿದ್ದುಪಡಿ) ನಿಯಮಗಳು 2008 ಮತ್ತು 2009ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಉಲ್ಲೇಖಿತ ಸರ್ಕಾರದ ಆದೇಶಗಳ ಅನುಮೋದನೆಯಂತೆ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ನೇರನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು ಆನ್ ಲೈನ್ ಮೂಲಕ ಆಹ್ವಾನಿಸಲಾಗಿದೆ.

**1) ಭರ್ತಿ ಮಾಡಲು ಉದ್ದೇಶಿಸಿರುವ ಗ್ರಾಮಲೆಕ್ಕಿಗರ ಹುದ್ದೆಗಳ ಸಂಖ್ಯೆ:– 56 (3 ಹಿಂಬಾಕಿ ಹುದ್ದೆಗಳು +53 ಪ್ರಸ್ತುತ ಹುದ್ದೆಗಳು)**

**2) ಹುದ್ದೆಗಳ ವರ್ಗೀಕರಣ:–** ಖಾಲಿ ಇರುವ ಹುದ್ದೆಗಳ ವರ್ಗವಾರು ಮೀಸಲಾತಿ ವಿವರ ಕೆಳಗಿನಂತೆ ಇದೆ (ರೋಸ್ಟರ್ ಬಿಂದುವಿನಂತೆ).

| ಕ್ರ. ಸಂ | ವರ್ಗ | ನಿಗದಿಪಡಿಸಿದ ಮೀಸಲಾತಿ (ಶೇಕಡಾವಾರು) | ನಿಗದಿಪಡಿಸಿದ ಹುದ್ದೆಗಳು | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲರು | ಮಾಜಿ ಸೈನಿಕರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ ಅಭ್ಯರ್ಥಿ | ಒಟ್ಟು | ಹಿಂಬಾಕಿ ಹುದ್ದೆ ರೋಸ್ಟರ್ ಬಿಂದು |
|---|---|---|---|---|---|---|---|---|---|---|---|---|
| **2012–13 ನೇ ಸಾಲಿನ ಹಿಂಬಾಕಿ ಹುದ್ದೆಗಳು** | | | | | | | | | | | | |
| 1 | IIಎ | – | – | – | – | 1 | – | – | – | – | 1 | 7–ಗ್ರಾಮೀಣ |
| 2 | IIIಬಿ | – | – | 1 | – | 1 | – | – | – | – | 2 | 19–ಗ್ರಾಮೀಣ<br>43–ಸಾಮಾನ್ಯ |
| | **ಒಟ್ಟು** | – | – | **1** | – | **2** | – | – | – | – | **3** | |

| **2014–15ನೇ ಸಾಲಿನಲ್ಲಿ ಭರ್ತಿ ಮಾಡಲು ಉದ್ದೇಶಿಸಿರುವ ಹುದ್ದೆಗಳ ವರ್ಗೀಕರಣ** | | | | | | | | | | | | |
|---|---|---|---|---|---|---|---|---|---|---|---|---|
| ಕ್ರ. ಸಂ | ವರ್ಗ | ನಿಗದಿಪಡಿಸಿದ ಮೀಸಲಾತಿ (ಶೇಕಡಾವಾರು) | ನಿಗದಿಪಡಿಸಿದ ಹುದ್ದೆಗಳು | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲರು | ಮಾಜಿ ಸೈನಿಕರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ ಅಭ್ಯರ್ಥಿ | ಒಟ್ಟು | ಮಹಿಳಾ ಮೀಸಲಾತಿ ನಿಗದಿಪಡಿಸಿದ ಬಿಂದು ಕ್ರಮ ಸಂಖ್ಯೆ |
| 1 | ಪ.ಜಾ | 15 | 8 | 1 | 2 | 3 | – | 1 | – | 1 | 8 | 16–ಗ್ರಾಮೀಣ |
| 2 | ಪ.ಪಂ | 03 | 2 | 1 | – | 1 | – | – | – | – | 2 | 7–ಸಾಮಾನ್ಯ |
| 3 | ಪ್ರವರ್ಗ–I | 04 | 2 | 1 | 1 | – | – | – | – | – | 2 | 8–ಮಹಿಳೆ |
| 4 | IIಎ | 15 | 8 | 1 | 2 | 3 | 1 | 1 | – | – | 8 | 10–ಮಾ.ಸೈ |
| 5 | IIಬಿ | 04 | 2 | 1 | 1 | – | – | – | – | – | 2 | 8–ಮಹಿಳೆ |
| 6 | IIIಎ | 04 | 2 | 1 | – | 1 | – | – | – | – | 2 | 7–ಸಾಮಾನ್ಯ |
| 7 | IIIಬಿ | 05 | 3 | – | 1 | 1 | – | 1 | – | – | 3 | 10–ಮಾ.ಸೈ |
| 8 | ಸಾಮಾನ್ಯ | 50 | 26 | 4 | 8 | 7 | 1 | 2 | 2 | 2 | 26 | 18–ಮಹಿಳೆ |
| | **ಒಟ್ಟು** | **100** | **53** | **10** | **15** | **16** | **2** | **5** | **2** | **3** | **53** | |
| ಜುಮ್ಲಾ ಭರ್ತಿ ಮಾಡಲಿರುವ ಹುದ್ದೆಗಳು | | | **56** | **11** | **15** | **18** | **2** | **5** | **2** | **3** | **56** | |

**3) ಶೈಕ್ಷಣಿಕ ವಿದ್ಯಾರ್ಹತೆ:–_** ದ್ವಿತೀಯ ಪಿ.ಯು.ಸಿ ಅಥವಾ ಸಿಬಿಎಸ್‌ಇ ಅಥವಾ ಐಸಿಎಸ್‌ಇ ಪರೀಕ್ಷೆಯಲ್ಲಿ ತೇರ್ಗಡೆಹೊಂದಿರಬೇಕು. ಈ ವಿದ್ಯಾರ್ಹತೆಯನ್ನು ಅಧಿಸೂಚನೆ ಹೊರಡಿಸಿರುವ ದಿನಾಂಕಕ್ಕೆ ಮುಂಚಿತವಾಗಿ ಹೊಂದಿರತಕ್ಕದ್ದು. ಈ ವಿದ್ಯಾರ್ಹತೆ ಹೊರತು ಪಡಿಸಿ ಇನ್ನಿತರ ಯಾವುದೇ ತತ್ಸಮಾನ ವಿದ್ಯಾರ್ಹತೆಗಳನ್ನು ಪರಿಗಣಿಸಲಾಗುವುದಿಲ್ಲ. ಕಂಪ್ಯೂಟರ್‌ನ ಸಾಮಾನ್ಯ ಜ್ಞಾನ (MS Office) ಹೊಂದಿರತಕ್ಕದ್ದು. ವಿದ್ಯಾರ್ಹತೆಯ ದಾಖಲಾತಿಗಳ ನೈಜತೆ ಬಗ್ಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ದೃಢಪಡಿಸಿ ಕೊಂಡ ನಂತರ ನೇಮಕಾತಿಗೆ ಪರಿಗಣಿಸಲಾಗುವುದು.

**4) ವೇತನ ಶ್ರೇಣಿ:–_** 11600–200–12000–250–13000–300–14200–350–15600–400–17200–450–19000–500–21000

**5) ಅರ್ಹತಾ ಷರತ್ತುಗಳು:–**

1) ಭಾರತೀಯ ನಾಗರೀಕನಾಗಿರತಕ್ಕದ್ದು. ಶೈಕ್ಷಣಿಕ ವಿದ್ಯಾರ್ಹತೆಯನ್ನು ಕರ್ನಾಟಕ ರಾಜ್ಯದಲ್ಲಿ ಪೂರೈಸಿರತಕ್ಕದ್ದು.

2) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಯಾವುದೇ ದೈಹಿಕ/ ಮಾನಸಿಕ ನ್ಯೂನತೆಯಿಂದ ಮುಕ್ತರಾಗಿರತಕ್ಕದ್ದು.

**6) ಅರ್ಜಿ ಸಲ್ಲಿಸುವ ವಿಧಾನ:–_** ಅರ್ಜಿಗಳನ್ನು ಆನ್‌ಲೈನ್ (Online) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

**7) ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ವಿಧಾನ:–** ಅಧಿಕೃತ ವೆಬ್‌ಸೈಟ್ **http://chikmagalur-va.kar.nic.in/** ತೆರೆದು ಕಂಪ್ಯೂಟರ್ ಪರದೆಯ ಮೇಲೆ ಬರುವ ಅರ್ಜಿಯನ್ನು ಆಂಗ್ಲ ಭಾಷೆಯಲ್ಲಿ ತುಂಬಬೇಕು. ನಂತರ ಅಭ್ಯರ್ಥಿಯ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು (jpg/ gif) Browse ಮಾಡಿ PREVIEW ಪರಿಶೀಲಿಸಿ, ನಂತರ ಬರುವ Security Code ನಮೂದಿಸಿ Submit Button ಅನ್ನು ಒತ್ತಿದರೆ ಅರ್ಜಿಯ ಸಂಖ್ಯೆ (Reference Number) ಸೃಷ್ಟಿಯಾಗುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ದ್ವಿಪ್ರತಿ ಚಲನ್ ಅನ್ನು ತೆಗೆದು– ಕೊಳ್ಳತಕ್ಕದ್ದು. ಈ ಚಲನ್ ಅನ್ನು ಅರ್ಜಿ ಶುಲ್ಕ ಪಾವತಿಸುವ ಬಗ್ಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕ್‌ನ ಶಾಖೆಯಲ್ಲಿ ಪಾವತಿಸಬೇಕು. ಬ್ಯಾಂಕಿನಲ್ಲಿ ನಿಗದಿತ ಅರ್ಜಿ ಶುಲ್ಕವನ್ನು ಪಾವತಿಸಲು ದಿನಾಂಕ: 13–03–2015 ಕೊನೆಯ ದಿನವಾಗಿರುತ್ತದೆ. ಅಭ್ಯರ್ಥಿಯು ಸ್ವೀಕೃತಿ ಸ್ಲಿಪ್‌ಅನ್ನು ಮತ್ತು ಚಲನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್ ಬಳಿ ಇರುತ್ತದೆ. ಈ ದಾಖಲೆಗಳನ್ನು ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕ: 08–04–2015 ರಂದು ಹಾಜರುಪಡಿಸತಕ್ಕದ್ದು. ನಿಗದಿತ ಅರ್ಜಿ ಶುಲ್ಕ ಹೊರತುಪಡಿಸಿ ಯಾವುದೇ ವಿಧವಾದ ಬ್ಯಾಂಕ್ ಶುಲ್ಕ ಇತ್ಯಾದಿ ಪಾವತಿಸುವ ಅವಶ್ಯಕತೆ ಇರುವುದಿಲ್ಲ. ಡಿ.ಡಿ. ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಅಥವಾ ನಗದಾಗಿ ಸ್ವೀಕರಿಸಲಾಗುವುದಿಲ್ಲ. ಸಲ್ಲಿಸಿರುವ ಅರ್ಜಿ ಶುಲ್ಕವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸ–ಲಾಗುವುದಿಲ್ಲ ಅಥವಾ ಬೇರೆ ಯಾವುದೇ ಇತರೆ ನೇಮಕಾತಿಗಳಿಗೆ ಹೊಂದಿಸಿ ಕೊಳ್ಳಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ದಿನಾಂಕದೊಳಗೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1) ಅರ್ಜಿಗಳನ್ನು ದಿನಾಂಕ: 12–02–2015 ರಿಂದ 13–03–2015 ಸಂಜೆ 5.30ರೊಳಗೆ ಸಲ್ಲಿಸತಕ್ಕದ್ದು.

2) ಅರ್ಜಿ ಶುಲ್ಕವನ್ನು ದಿನಾಂಕ: 12–02–2015 ರಿಂದ 13–03–2015ರ ವರೆಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿ ಬ್ಯಾಂಕ್ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

3) ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ನಿಗದಿತ ಶುಲ್ಕ ಪಾವತಿಯ ಕುರಿತು ವಸ್ತುಸ್ಥಿತಿ (Status) ಅನ್ನು ಶುಲ್ಕ ಪಾವತಿಸಿದ 5 ದಿನಗಳ ನಂತರ ಪರಿಶೀಲಿಸಿಕೊಳ್ಳಬಹುದು. ಪಾವತಿಯಾಗಿರುವುದು ಖಚಿತವಾಗದಿದ್ದರೆ ಚಲನ್ ಪ್ರತಿಯನ್ನು ಈ ಕಾರ್ಯಾಲಯಕ್ಕೆ ಕಳುಹಿಸತಕ್ಕದ್ದು.

**8) ಅರ್ಜಿ ಶುಲ್ಕ:–**

| ವರ್ಗ | ಶುಲ್ಕ | ಪಾವತಿಸುವ ವಿಧಾನ |
|---|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲ ಹಾಗೂ ಮಾಜಿ ಸೈನಿಕರು | ₹ 150–00 | ಚಲನ್ ಮೂಲಕ SBM ಚಿಕ್ಕಮಗಳೂರು ಶಾಖೆಯ SB A/c No. **64050347617** IFSC Code: SBMY0040143**ಗೆ ಜಮಾ ಮಾಡತಕ್ಕದ್ದು** |
| ಇತರರು | ₹ 300.00 | |

**9) ವಯೋಮಿತಿ:–_** ಈ ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ಕನಿಷ್ಠ 18 ವರ್ಷ ಪೂರೈಸಿರತಕ್ಕದ್ದು ಮತ್ತು ಈ ಕೆಳಗಿನ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು

| ವರ್ಗ | ಕನಿಷ್ಠ | ಗರಿಷ್ಠ |
|---|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–1 | 18 ವರ್ಷ | 40 ವರ್ಷ |
| II–ಎ, II–ಬಿ, III–ಎ, III–ಬಿ | 18 ವರ್ಷ | 38 ವರ್ಷ |
| ಸಾಮಾನ್ಯ ವರ್ಗ | 18 ವರ್ಷ | 35 ವರ್ಷ |

ಆಯ್ಕೆ ಸಮಯದಲ್ಲಿ ಎಸ್.ಎಸ್.ಎಲ್.ಸಿ ಅಥವಾ ವರ್ಗಾವಣೆ ಪ್ರಮಾಣಪತ್ರ (ಟಿ.ಸಿ) ಯನ್ನು ಜನ್ಮ ದಿನಾಂಕದ ಗಣನೆಗೆ ತೆಗೆದುಕೊಳ್ಳಲಾಗುವುದು. ಬೇರೆ ಯಾವುದೇ ದಾಖಲೆಯನ್ನು ಪರಿಗಣಿಸಲಾಗುವುದಿಲ್ಲ.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ನಿಗಧಿಪಡಿಸಿದೆ.

ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು/ಅವಳು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

ಆ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದರೆ 10 ವರ್ಷಗಳು

**10) ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:–**ಜಾತಿ ಮೀಸಲಾತಿ ಕೋರ ಬಯಸುವ

(1) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ–ಡಿ ರಲ್ಲಿ (ಅನುಬಂಧ–1)

(2) ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ–ಇ ನಲ್ಲಿ (ಅನುಬಂಧ–2)

(3) II–ಎ, II–ಬಿ, III–ಎ, III-ಬಿ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರ ಪಡೆದಿರಬೇಕು (ಅನುಬಂಧ–3)

ಈ ಪ್ರಮಾಣ ಪತ್ರಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅರ್ಹತೆ ಪಡೆದಿರಬೇಕು.

ಜಾತಿ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ (ಅಧ್ಯಕ್ಷರು, ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

**11) ಗ್ರಾಮೀಣ ಮೀಸಲಾತಿ:–** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ (Non Creamy Layer) ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದುಕೊಂಡಿರತಕ್ಕದ್ದು.

**12) ಮಾಜಿ ಸೈನಿಕ–**_ಮಾಜಿ ಸೈನಿಕ ಅಭ್ಯರ್ಥಿಗಳಿಂದ ಸೈನ್ಯ ನಿಯೋಜನೆ, ಸೈನ್ಯದಿಂದ ತೆಗೆದು ಹಾಕಿದ ಹಾಗೂ ಸ್ವಯಂ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರು ಸೇವೆ ಸಲ್ಲಿಸಿದ ಸೇವಾ ಅವಧಿ ಜೊತೆ ಹೆಚ್ಚುವರಿ ಮೂರು ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ಧವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಗಳಲ್ಲಿ ಪರಿಭಾಷೆಯ ಅರ್ಥ ಹೊಂದಿದೆ.

**13) ಕನ್ನಡ ಮಾಧ್ಯಮ:–**_ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರು ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡು ಪರಿಶೀಲನೆಯ ದಿನಾಂಕದಂದು ಹಾಜರುಪಡಿಸತಕ್ಕದ್ದು.

**14) ಯೋಜನಾ ನಿರಾಶ್ರಿತರು:–** ಯೋಜನೆಗಳಿಂದ ನಿರ್ವಸಿತರಾದ ಕುಟುಂಬಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕ್ಲೈಂ ಮಾಡುವ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ. ಡಿಪಿಎಆರ್ 44 .ನೇಸನಿ/2001 ದಿನಾಂಕ 27–7–2001ರಲ್ಲಿ ಸೂಚಿಸಿರುವಂತೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸ ತಕ್ಕದ್ದು (ಅನುಬಂಧ–2)

**15) ಅಂಗವಿಕಲರ ಮೀಸಲಾತಿ ಬಗ್ಗೆ:–**_ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1ಎ)ರನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇ 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 54 ಎಸ್ಆರ್ಆರ್ 2012 ದಿನಾಂಕ 23–06–2012 ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ. (1) ಕುಷ್ಠ ರೋಗದಿಂದ ಗುಣಮುಖರಾದವರು (Leprosy cured) (2) ಶ್ರವಣ ದೋಷವುಳ್ಳವರು (Hearing impaired) (3) ಮಾನಸಿಕ ಅಸ್ವಸ್ಥತೆ (Mentally ill) (4) ದೈಹಿಕ ಅಂಗವಿಕಲತೆಯುಳ್ಳ (Loco motor Disability) ಈ 4 ಅಂಗವಿಕಲತೆಯನ್ನು ಹೊರತುಪಡಿಸಿ ಇತರೆ ದೈಹಿಕ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

ಸರ್ಕಾರದ ಅಧಿಕೃತ ಜ್ಞಾಪನ ಸಂ. ಸಿಆಸುಇ 115 ಸೇನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಆಯ್ಕೆ ಮಾಡುವ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ದೊಳಗೆ ಅರ್ಹತೆಯನ್ನು ಪಡೆದಿರಬೇಕು.

ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿ ಪ್ರಕಟಗೊಂಡ ಅಭ್ಯರ್ಥಿಗಳು ಮಾತ್ರ ನಿಗದಿತ ದಿನಾಂಕ: 08–04–2015 ರಂದು ಬೆಳಿಗ್ಗೆ 10–00 ಗಂಟೆಗೆ ನೇಮಕಾತಿ ಪ್ರಾಧಿಕಾರ ಸೂಚಿಸುವ ಸ್ಥಳದಲ್ಲಿ ತಪ್ಪದೇ ಹಾಜರಾಗತಕ್ಕದ್ದು.

**16) ಆಯ್ಕೆ ವಿಧಾನ:–**_ಕರ್ನಾಟಕ ಜನರಲ್ ಸರ್ವೀಸಸ್ (Revenue Sub-Ordinate Branch) (Cadre and Recruitment) (ತಿದ್ದುಪಡಿ) ನಿಯಮಗಳು 2008 ಮತ್ತು 2009 ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಆಯಾಯ ಮೀಸಲಾತಿ ಪ್ರವರ್ಗಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಲಾಗುವುದು. ನಿಯಮಾವಳಿಯಂತೆ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು 28–04–2015 ದಿನಾಂಕದಂದು ಪ್ರಕಟಿಸಲಾಗುವುದು.

**17) ಈ ಕೆಳಕಂಡ ಮೂಲ ಪ್ರಮಾಣಪತ್ರಗಳನ್ನು** ನಿಗದಿಪಡಿಸಿದ ದಿನಾಂಕದಂದು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು.

(1) ದ್ವಿತೀಯ ಪಿ.ಯು.ಸಿ ಅಥವಾ ಸಿಬಿಎಸ್ಇ ಅಥವಾ ಐಸಿಎಸ್ಇ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಗ್ಗೆ ಪ್ರಮಾಣ ಪತ್ರ.

(2) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್ಎಸ್ಎಲ್ಸಿ ಅಂಕಪಟ್ಟಿ ಅಥವಾ ಟಿ.ಸಿ ಪ್ರಮಾಣ ಪತ್ರ)

(3) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರಬೇಕು

(4) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಅನುಬಂಧ–1 ನಮೂನೆ–4) ಮತ್ತು ಪ್ರವರ್ಗ–1 (ಅನುಬಂಧ–2 ನಮೂನೆ–ಎ) ಹಾಗೂ 2ಎ, 2ಬಿ, 3ಎ, 3ಬಿ (ಅನುಬಂಧ–3, ನಮೂನೆ–ಎಫ್) ಮೀಸಲಾತಿ ಅಭ್ಯರ್ಥಿಗಳು ಕ್ರಮವಾಗಿ ನಮೂನೆ ಸಿ/ಇ/ಎಫ್ ರಲ್ಲಿ ಸಂಬಂಧಿಸಿದ ತಹಸೀಲ್ದಾರ್ರವರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.

(5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ

(6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ

(7) ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗೆಗಿನ ಪ್ರಮಾಣ ಪತ್ರ

(8) ಕಂಪ್ಯೂಟರ್ ಸಾಮಾನ್ಯ ಜ್ಞಾನ ಹೊಂದಿರುವ ಬಗ್ಗೆ ಪ್ರಮಾಣ ಪತ್ರ

**18. ಸಾಮಾನ್ಯ ಸೂಚನೆಗಳು:–**

1) ನೈತಿಕ ದುರ್ನಡತೆಯಿಂದಾಗಿ ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ, ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ ಅಥವಾ ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗಿರುತ್ತಾರೆ.

2) ಅರ್ಜಿ ಸಲ್ಲಿಸುವಾಗ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದು ಕೊಳ್ಳುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.

3) ಅರ್ಜಿಯಲ್ಲಿ ನೀಡಿರುವ ವಿಳಾಸವೇ ಅಂತಿಮವಾಗಿದ್ದು, ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆಯಾದರೆ ಆ ವಿಳಾಸಕ್ಕೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

4) ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಆನ್‌ಲೈನ್ ಮುಖಾಂತರ ವೆಬ್‌ಸೈಟ್‌ನಲ್ಲಿ ಲಭ್ಯವಿರುವ ಸೂಚನೆಗಳನ್ನು ಪಾಲಿಸಬೇಕು.

5) ಅಭ್ಯರ್ಥಿಯ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

6) ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ದೊರೆಯುವುದಿಲ್ಲ.

7) ಆಯ್ಕೆ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದ ಇರುವುದಿಲ್ಲ.

8) ಅರ್ಜಿ ತುಂಬುವ ವಿಧಾನ ಹಾಗೂ ಹೆಚ್ಚಿನ ವಿವರಗಳನ್ನು ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ಕಛೇರಿಯ ಅಧಿಕೃತ ವೆಬ್‌ಸೈಟ್ http://www.chickmagalur.nic.in/ ರಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ. ಹಾಗೂ ಸ್ಪಷ್ಟೀಕರಣ ಅಗತ್ಯವಿದ್ದಲ್ಲಿ ಸಹಾಯವಾಣಿ ಸಂ. 08262–235262, ರಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

9) ಈ ಅಧಿಸೂಚನೆಯನ್ನು ಯಾವುದೇ ಕಾರಣವನ್ನು ನೀಡದೇ, ಯಾವುದೇ ಸಮಯದಲ್ಲಿ ರದ್ದುಗೊಳಿಸುವ ಅಧಿಕಾರವು ಗ್ರಾಮಲೆಕ್ಕಾಧಿಕಾರಿ ಆಯ್ಕೆ ಪ್ರಾಧಿಕಾರಕ್ಕೆ ಇರುತ್ತದೆ.

**ಬಿ. ಎಸ್. ಶೇಖರಪ್ಪ**
ಅಧ್ಯಕ್ಷರು, ಗ್ರಾಮಲೆಕ್ಕಿಗರ ಆಯ್ಕೆ ಮತ್ತು
ನೇಮಕಾತಿ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು–577101.

**PR. 38**
**SC. 200**

## ನಮೂನೆ–1

## 9ನೇ ನಿಯಮ ನೋಡಿ

## ಸಾರ್ವಜನಿಕ ಶಿಕ್ಷಣ ಇಲಾಖೆ

## ಉಪ ನಿರ್ದೇಶಕರು (ಆಡಳಿತ) ಕಾರ್ಯಾಲಯ, ಧಾರವಾಡ

## ಅಧಿಸೂಚನೆ

ಶ್ರೀಮತಿ. ವಿಜಯಲಕ್ಷ್ಮಿ ಹನಮಂತರಾವ್ ಭಂಡಿವಾಡ ಕೆಲಸ ಮಾಡುತ್ತಿರುವ ಸಹಶಿಕ್ಷಕಿ (ಹಿಂದಿ), ಸೆಂಟ್ ಜೋಸೆಫ್ಸ್ ಪ್ರೌಢಶಾಲೆ, ಧಾರವಾಡ (ಅನುದಾನಿತ) (ಸದರಿ ಪ್ರೌಢ ಶಾಲೆ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಮಾನ್ಯತೆ ಪಡೆದ ಶಾಲೆ), ಇವರು ಬೆಳಗಾವಿ, ಡಯೋಸ್ ಬೋರ್ಡ್ ಆಫ್ ಎಜ್ಯುಕೇಶನ್ ಮತ್ತು ಸೋಶಿಯಲ್ ವೆಲ್‌ಫೇರ್, ಬಿಶಫ್ಸ್ ಹೌಸ್, ಬಿ.ಸಿ.69, ಕ್ಯಾಂಪ್–ಬೆಳಗಾವಿ, ಈ ಆಡಳಿತ ಮಂಡಳಿ ವತಿಯಿಂದ ನಡೆಯುತ್ತಿರುವ ಸೆಂಟ್ ಜೋಸೆಫ್ಸ್ ಪ್ರೌಢಶಾಲೆ, ಧಾರವಾಡ (ಅನುದಾನಿತ) ಇದು ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಮಾನ್ಯತೆ ಪಡೆದ ಅನುದಾನಿತ ಪ್ರೌಢ ಶಾಲೆಯಲ್ಲಿ ಸಹ ಶಿಕ್ಷಕಿ (ಹಿಂದಿ) ಎಂದು ಕೆಲಸ ಮಾಡುತ್ತಿದ್ದು ಅವಳ ಹೆಸರು ಬದಲಾವಣೆಗೆ ಈ ಕೆಳಕಂಡಂತೆ ಅನುಮತಿ ನೀಡಲಾಗಿದೆ.

ಈ ಹೆಸರಿಗೆ ಶ್ರೀಮತಿ. ವಿದ್ಯಾ ಬದರೀವಿಶಾಲ ಪರ್ವತೀಕರ

**ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ**
**ಶಿಕ್ಷಣ ಇಲಾಖೆ ಧಾರವಾಡ.**

**PD.C/N. 133**
**SC. 10**

## PUBLIC NOTICE

**IN THE COURT OF THE CITY CIVIL JUDGE**

**Mayo Hall, Begaluru CCH No.20 HG: 20/03/2015**

**G & W.C.No. 25002/2015**

In the matter of permission to sell minor share of the property

1. Lt Col Mark Robert Arland, S/o Mr Alfred Rock Arland Aged about 45 years.
2. Ms. Namrata Judith Arland, Aged about 16 years, Minor represented by her natural Guardian and father petitioner No.1

Presently at Flat No. 3-C, III Floor, " TULIP APARTMENTS,

No.128/1, Doddanekkundi,

K.R. Puram, Bangalore-560----- Petitioners

Vs.

NIL Respondents

Notice is hereby given that a petition has been made to this court under section 29 of the Guardians and Wards Act for grant of permission to sell minor/petitioner No.3, 1/3[rd] share in flat No.3-C III floor, " TULIP APARTMENT" site No. 3, khatha No.128/1, property No. 12/2 situated at Doddanekkundi Village, K.R. Puram Hobli, Bengaluru East Taluk, within the jurisdiction of BBMP new PID No. 085-W0341-6-21, measuring undivided share of land 400 sq ft, super built up area 1575 sq ft and a car park, bounded on the East by: Site No. 1 and 2 West by : Site No. 4, North by: Water Cannel, South by: Road.

Be it known that no caveat has been entered and the said petition is posted for hearing on 20.03.2015 at 11.00 a.m. All persons claiming to have any interest in the assets of the minor/petitioner No.2, may come and see the proceedings before grant of permission to sell infavour of the petitioner No. 1.

Given under my hand seal of the court, this the 26/02/2015.

By Order of the Court,
**Sheristedar,**
City Civil Court Mayo Hall, Bengaluru

**PD.77**
**SC. 05**

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟ.

**ಅಧಿಸೂಚನೆ ಸಂಖ್ಯೆ : 01/2015, ದಿನಾಂಕಃ 12–02–2015.**

**ವಿಷಯ :** ಹಿಂಬಾಕಿ ಉಳಿದ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ನೇರ ನೇಮಕಾತಿ.

**ಉಲ್ಲೇಖ :** 1) ಈ ನ್ಯಾಯಾಲಯದ ಕಚೇರಿ ಅಧಿಸೂಚನೆ ಸಂಖ್ಯೆ: 01/2014, ದಿನಾಂಕ: 18–06–2014.

2) ಈ ನ್ಯಾಯಾಲಯದ ಕಚೇರಿ ಟಿಪ್ಪಣಿ ದಿನಾಂಕ: 12–02–2015.

ಬಾಗಲಕೋಟ ಜಿಲ್ಲೆಯ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಹಿಂಬಾಕಿ ಉಳಿದ "ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ" ಹುದ್ದೆಗಳಿಗಾಗಿ ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದ್ದು, ಇಚ್ಛೆಯುಳ್ಳ ಅಭ್ಯರ್ಥಿಗಳು ಎಲ್ಲ ಅಂಕಣಗಳನ್ನು ಭರ್ತಿ ಮಾಡಿ ಅರ್ಜಿಯ ಜೊತೆಗೆ ದಾಖಲಾತಿಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ, ಈ ವಿಳಾಸಕ್ಕೆ ನಿಗದಿತ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕಃ 12–03–2015.**

**ಸಾಯಂಕಾಲ 05–00 ಗಂಟೆಯವರೆಗೆ**

**1) ನೇರ ನೇಮಕಾತಿಗಾಗಿ ನಿಗದಿಪಡಿಸಿದ ಹಿಂಬಾಕಿ ಹುದ್ದೆಗಳ ಸಂಖ್ಯೆ ಹಾಗೂ ವರ್ಗೀಕರಣಃ–**

| ಕ್ರ. ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಹುದ್ದೆಗಳು | | ವರ್ಗೀಕರಣ | | | | | |
|---|---|---|---|---|---|---|---|---|---|
| | | | | ಇತರೆ | ಗ್ರಾಮೀಣ | ಮಹಿಳೆ | ಅಂಗವಿಕಲ | ಮಾಜಿ ಸೈನಿಕ | ಯೋಜನಾ ನಿರಾಶ್ರಿತ |
| 1 | 2 | 3 | 4 | 5 | 6 | 7 | 8 | 9 | 10 |
| 1 | ಶೀಘ್ರಲಿಪಿಗಾರರು 14550 – 26700 (ಇತರೆ ಭತ್ಯೆಗಳು) | 10 | ಸಾಮಾನ್ಯ ಅಭ್ಯರ್ಥಿ | – | 1 | – | – | – | 1 |
| | | | ಪರಿಶಿಷ್ಟ ಜಾತಿ | – | 2 | – | 1 | – | – |
| | | | ಪರಿಶಿಷ್ಟ ಪಂಗಡ | 1 | – | – | – | – | – |
| | | | ಪ್ರವರ್ಗ–1 | – | – | 1 | – | – | – |
| | | | ಪ್ರವರ್ಗ–2ಎ | – | 1 | – | 1 | – | – |
| | | | ಪ್ರವರ್ಗ–2ಬಿ | – | – | 1 | – | – | – |
| | | | ಒಟ್ಟು | 1 | 4 | 2 | 2 | – | 1 |

| | | | | | | | | | |
|---|---|---|---|---|---|---|---|---|---|
| 2 | ಬೆರಳಚ್ಚುಗಾರರು 11600 – 21000 (ಇತರೆ ಭತ್ಯೆಗಳು) | 03 | ಸಾಮಾನ್ಯ ಅಭ್ಯರ್ಥಿ | – | – | – | 1 | – | – |
| | | | ಪರಿಶಿಷ್ಟ ಜಾತಿ | – | 1 | – | – | – | – |
| | | | ಪ್ರವರ್ಗ–2ಎ | – | 1 | – | – | – | – |
| | | | ಒಟ್ಟು | – | 2 | – | 1 | – | – |

2) **ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ :–**

| ಕ್ರಮ ಸಂಖ್ಯೆ | ಹುದ್ದೆ | ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ |
|---|---|---|
| 01 | ಶೀಘ್ರಲಿಪಿಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ. |
| 02 | ಬೆರಳಚ್ಚುಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ. |

3) **ವಯೋಮಿತಿ :–**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಪ್ರವರ್ಗ | ಕನಿಷ್ಠ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ ವರ್ಗ | 18 ವರ್ಷ | 35 ವರ್ಷ |
| 2 | ಪ್ರವರ್ಗ 2ಎ, 2ಬಿ, 3ಎ, 3ಬಿ | | 38 ವರ್ಷ |
| 3 | ಪರಿಶಿಷ್ಟ ಜಾತಿ ಃ ಪರಿಶಿಷ್ಟ ಪಂಗಡ ಃ ಪ್ರವರ್ಗ–1 | | 40 ವರ್ಷ |

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವದು.

**4) ಆಯ್ಕೆ ವಿಧಾನ :–**

1) ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವದು. ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವದು ಮತ್ತು ನಿರ್ದಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುವದು.

2) ಶೀಘ್ರಲಿಪಿಗಾರ ಹುದ್ದೆಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗದಿಪಡಿಸಿದ್ದು, ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ, ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು, ಶೀಘ್ರಲಿಪಿ ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನಡೆಸಲಾದ ಶೀಘ್ರಲಿಪಿ ಹಾಗೂ ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಹಾಗೂ ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

3) ಬೆರಳಚ್ಚುಗಾರರ ಹುದ್ದೆಗಳಿಗೆ ಬೆರಳಚ್ಚು ಮಾಡಲು ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗದಿಪಡಿಸಿದ್ದು, ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ, ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಗಳಲ್ಲಿ ಹಾಗೂ ಈ ಪ್ರಾಧಿಕಾರ ನೆಡಸಲಾದ ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಹಾಗೂ ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

**4) ಸೂಚನೆಗಳು :–**

1) ಅಭ್ಯರ್ಥಿಗಳು ತಾವು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸಿದ್ದಾರೆ ಎನ್ನುವುದನ್ನು ಲಕೋಟೆಯ ಮೇಲೆ ಹಾಗೂ ಅರ್ಜಿಯ ಮೇಲೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

2) ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಹಾಗೂ ಸೇವಾ ಪ್ರಮಾಣ ಪತ್ರವನ್ನು ಪಡೆದುಕೊಂಡು, ಅರ್ಜಿಯ ಜೊತೆಗೆ ಲಗತ್ತಿಸಿ, ಆ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

3) ಅಭ್ಯರ್ಥಿಗಳು ನಿರ್ದಿಷ್ಟಪಡಿಸಿದ ಅರ್ಜಿ ನಮೂನೆಯಲ್ಲಿ ತಮ್ಮ ಇತ್ತೀಚಿನ ಪಾಸ್‌ಪೋರ್ಟ್ ಸೈಜ ಭಾವಚಿತ್ರವನ್ನು ಅಂಟಿಸಿ, ಅದರ ಜೊತೆಗೆ ಸ್ವ–ವಿಳಾಸವಿರುವ ಮತ್ತು 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸತಕ್ಕದ್ದು.

4) ಅಭ್ಯರ್ಥಿಗಳನ್ನು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಗುಣಗಳ ಆಧಾರದ ಮೇಲೆ ಅರ್ಹತಾ ಪರೀಕ್ಷೆಗೆ ಕರೆಯಬೇಕಾಗಿರುವದರಿಂದ, ಅವರು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿದ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿಗಳ ನಕಲುಗಳನ್ನು ಕಡ್ಡಾಯವಾಗಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.

5) ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ದಾಖಲೆಯನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

6) ಮೀಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸರಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

7) ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವದು.

8) ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

9) ಅಪೂರ್ಣ ಮತ್ತು ಕಡ್ಡಾಯವಾಗಿ ಲಗತ್ತಿಸಬೇಕಾದ ದಾಖಲಾತಿಗಳನ್ನು ಲಗತ್ತಿಸಲಾರದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.

10) ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ದಿನಾಂಕ: 19–05–2005ರ ಸರಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ/115/ಸೇನೆನಿ/2005 ರಡಿಯಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು, ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

11) ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರಕಾರಿ ಆದೇಶ ಸಂಖ್ಯೆ: ಸಿಆಸುಇ/98/ಸೇನೆನಿ/2005, ದಿನಾಂಕ: 10–08–2005ರ ಪ್ರಕಾರ ನಿಗದಿತ ನಮೂನೆ 2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿ, ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

12) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ 1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ತಹಶೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

13) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿ ಕ್ಕೆ ಸೇರಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ಛಾಯಾ ಪ್ರತಿಗಳನ್ನು ಸಲ್ಲಿಸತಕ್ಕದ್ದು.

14) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

15) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅರ್ಜಿದಾರರಿಗೆ ಸಂಬಂಧಿಕರಲ್ಲದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

16) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅಭ್ಯರ್ಥಿಯು ಅಭ್ಯಸಿಸಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ವಿಶೇಷ ಸೂಚನೆಗಳು :–**

1) ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.

2) ಯಾವುದೇ ಅಭ್ಯರ್ಥಿಯು ಸರ್ಕಾರಿ : ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಪ್ರಭಾವ ಬೀರಿದಲ್ಲಿ, ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅನರ್ಹರಾಗುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ಪರಿಗಣಿಸಲಾಗುವುದು.

4) ಯಾವುದೇ ಅಭ್ಯರ್ಥಿಗೆ ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯತಕ್ಕದ್ದು ಮತ್ತು ಆ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.

5) ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

6) ಅಭ್ಯರ್ಥಿಗಳು ಈ ನೇಮಕಾತಿ ಪ್ರಾಧಿಕಾರ (ಜಿಲ್ಲಾ ನ್ಯಾಯಾಲಯ, ಬಾಗಲಕೋಟ) ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅರ್ಜಿಗಳನ್ನು ತಮ್ಮ ಸ್ವಂತ ಹಸ್ತಾಕ್ಷರಗಳಿಂದ ಭರ್ತಿ ಮಾಡಿ ಸಲ್ಲಿಸತಕ್ಕದ್ದು, ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಸ್ಥಳ : ಬಾಗಲಕೋಟ.**

**ದಿನಾಂಕ : 12–02–2015**

**ಎಸ್. ಮಹಾಲಕ್ಷ್ಮಿ ನೇರಳೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ

**ಅರ್ಜಿ ನಮೂನೆ**

**ಬಾಗಲಕೋಟ ಜಿಲ್ಲೆಯ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರ / ಬೆರಳಚ್ಚುಗಾರ ಹುದ್ದೆಗೆ ಅರ್ಜಿ**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ : 12-03-2015.)**

ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವನ್ನು ಅಂಟಿಸುವದು

ಗೆ,

ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ.

**ಮಾನ್ಯರೇ,**

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ : 01 / 2015 ದಿನಾಂಕ : 12-02-2015 ರ ಪ್ರಕಟಣೆ ಮೇರೆಗೆ ನಾನು ಈ ಕೆಳಕಂಡ ಮಾಹಿತಿಗಳೊಂದಿಗೆ "____________________" ಹುದ್ದೆಗೆ ಹಾಗೂ "________________________" ಮೀಸಲಾತಿ ಅಡಿಯಲ್ಲಿ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | |
|---|---|---|---|---|
| 1) | ಅಭ್ಯರ್ಥಿಯ ಪೂರ್ಣ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2) | ತಂದೆ : ಗಂಡನ ಹೆಸರು | | | |
| 3) | ತಾಯಿಯ ಹೆಸರು | | | |
| 4) | ಸಂಪೂರ್ಣ ಅಂಚೆ ವಿಳಾಸ | | | |
| 5) | ದೂರವಾಣಿ : ಮೊಬೈಲ್ ಸಂಖ್ಯೆ | | | |
| 6) | ಜನ್ಮ ದಿನಾಂಕ : (ಸೂಕ್ತ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸುವದು) | | | |
| 7) | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳು | ದಿನಗಳು |
| 8) | ಲಿಂಗ | ಪುರುಷ | ಮಹಿಳೆ | |
| 9) | ರಾಷ್ಟ್ರೀಯತೆ | | | |
| 10) | ಧರ್ಮ ಮತ್ತು ಜಾತಿ | | | |
| 11) | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| 12) | ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಗಂಡ: ಹೆಂಡತಿ ಇದ್ದಾರೆಯೇ? | | | |
| 13) | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | | | |
| 14) | ನೀವು ಸರಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ? ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | |
| 15) | ನೀವು ಸರಕಾರಿ ಸೇವೆಯಲ್ಲಿ ಇದ್ದಲ್ಲಿ ಅದರ ವಿವರ (ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| 16) | ಶೈಕ್ಷಣಿಕ ವಿದ್ಯಾರ್ಹತೆ | ಗರಿಷ್ಟ ಅಂಕಗಳು | ಪಡೆದ ಅಂಕಗಳು | ಶೇಕಡಾವಾರು |
| | 1) ಎಸ್‌ಎಸ್‌ಎಲ್‌ಸಿ | | | |
| | 2) ಹಿರಿಯ ಕನ್ನಡ ಶೀಘ್ರಲಿಪಿ | | | |
| | 3) ಹಿರಿಯ ಆಂಗ್ಲ ಶೀಘ್ರಲಿಪಿ | | | |
| | 4) ಹಿರಿಯ ಕನ್ನಡ ಬೆರಳಚ್ಚು | | | |
| | 5) ಹಿರಿಯ ಆಂಗ್ಲ ಬೆರಳಚ್ಚು | | | |
| | (ಸೂಕ್ತ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸುವದು) | | | |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| | | | | |
|---|---|---|---|---|
| 17) | ಹೆಚ್ಚಿನ ವಿದ್ಯಾರ್ಹತೆಗಳು<br>(ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| 18) | ಯಾವ ಮಿಸಲಾತಿ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತೀರಿ? | | | |
| 19) | ಹೆಚ್ಚಿನ ಸೇವಾ ಅನುಭವ ಇದ್ದಲ್ಲಿ ಅದರ ವಿವರ (ಪ್ರಮಾಣ ಪತ್ರ ಲಗತ್ತಿಸುವದು) | | | |
| 20) | ಲಗತ್ತಿಸಿದ ದಾಖಲೆಗಳು | 1)<br>2)<br>3)<br>4)<br>5)<br>6)<br>7)<br>8)<br>9)<br>10) | | |

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಮತ್ತು ಕಾನೂನಿನ ಅನುಸಾರ ನನ್ನ ಮೇಲೆ ಸೂಕ್ತ ಕ್ರಮವನ್ನು ಕೈಕೊಳ್ಳಬಹುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ ಃ

ದಿನಾಂಕ ಃ **ಅಭ್ಯರ್ಥಿಯ ಸಹಿ**

**ಸೂಚನೆ ಃ** ಅಭ್ಯರ್ಥಿಗಳು ಅರ್ಜಿಯ ಜೊತೆಗೆ 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

**P.R. 49**

**SC - 5**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.